ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 23ನೇ ಮಾರ್ಚ್, 2020

ಶಿಕ್ಷಕರು ಮತ್ತು ಉಪನ್ಯಾಸಕರಿಗೆ ವಿಶೇಷ ಭತ್ಯೆ ಮಂಜೂರು ಮಾಡುವ ಬಗ್ಗೆ

ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ) ಮತ್ತು ಶ್ರೀ ಎಸ್.ವ್ಹಿ.ಸಂಕನೂರ (ಪದವೀಧರರ ಕ್ಷೇತ್ರ) :-

1471 (1741 + 1729) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 01.08.2008 ಮುಂಚೆ ಅಂದರೆ ಜುಲೈ ತಿಂಗಳಲ್ಲಿ ನೇಮಕಾತಿಯಾಗಿ ಅದೇ ತಿಂಗಳಲ್ಲಿ ಸೇವೆಯಲ್ಲಿ ಸೇರಿದವರಿಗೆ ವಿಶೇಷ ಭತ್ಯೆ ನೀಡಲಾಗಿದೆ. ಆದರೆ ಸದರಿ ಪಟ್ಟಿಯಲ್ಲಿದ್ದು, 1.8.2008ರ ನಂತರ ಕರ್ತವ್ಯಕ್ಕೆ ಹಾಜರಾದವರಿಗೆ ವಿಶೇಷ ಭತ್ಯೆ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಬಂದಿದ್ದರೆ, ಇದನ್ನು ಸರಿಪಡಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಯಾವ ಕಾಲಮಿತಿಯೊಳಗೆ ವಿಶೇಷ ಭತ್ಯೆ ಮಂಜೂರು ಮಾಡಲಾಗುವುದು; (ವಿವರ ನೀಡುವುದು)

(ಇ) 2008ರ ನಂತರ ಪ್ರೌಢ ಶಾಲೆ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿ ಸಹ ಶಿಕ್ಷಕರಾಗಿ/ಉಪನ್ಯಾಸಕರಾಗಿ ನೇಮಕಗೊಂಡ ಸಿಬ್ಬಂದಿಗೆ ಕುಮಾರ ನಾಯಕ್ ವರದಿ ಪ್ರಕಾರ ಒಂದು ಹೆಚ್ಚುವರಿ ಇನ್‌ಕ್ರಿಮೆಂಟ್ ನೀಡಲಾಗಿದೆಯೇ; (ಮಾಹಿತಿ ನೀಡುವುದು)

(ಈ) 2008ರ ನಂತರ ನೇಮಕಗೊಂಡ ಸಹ-ಶಿಕ್ಷಕರು ಹಾಗೂ ಉಪನ್ಯಾಸಕರಿಗೂ ಕೂಡಾ ಇತ್ತೀಚೆಗೆ ಒಂದು ಹೆಚ್ಚುವರಿ ಇನ್‌ಕ್ರಿಮೆಂಟ್ ನೀಡಬೇಕೆಂದು ನ್ಯಾಯಾಲಯವು ತೀರ್ಪು ನೀಡಿರುವುದೆಂಬ ಸಂಗತಿ ನಿಜವೇ; ಹಾಗಿದ್ದಲ್ಲಿ, ಈ ಕುರಿತು ಸರ್ಕಾರ ಏನು ಕ್ರಮ ಕೈಗೊಂಡಿದೆ ? (ಮಾಹಿತಿ ನೀಡುವುದು)